## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 780
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 17.09.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಹುಣಸೂರು ತಾಲ್ಲೂಕು ಬಿಳಿಕೆರೆ ಹೋಬಳಿ ವಡ್ಡರಹಳ್ಳಿಗೆ ಮೈಸೂರು ನಗರದಿಂದ ನೇರ ಬಸ್ ಸೌಲಭ್ಯ ಇಲ್ಲದೆ ವಿದ್ಯಾರ್ಥಿಗಳಿಗೆ ಗ್ರಾಮೀಣ ಪ್ರದೇಶದ ಜನರಿಗೆ ಅನಾನುಕೂಲ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹುಣಸೂರು ತಾಲ್ಲೂಕು ಬಿಳಿಕೆರೆ ಹೋಬಳಿ ವಡ್ಡರಹಳ್ಳಿಗೆ ಮೈಸೂರು ನಗರದಿಂದ ನೇರ ಬಸ್ ಸೌಲಭ್ಯ ಇಲ್ಲದೆ ಅನಾನುಕೂಲವಾಗಿರುವ ಬಗ್ಗೆ ಸಾರ್ವಜನಿಕ ಪ್ರಯಾಣಿಕರಿಂದ ಯಾವುದೇ ಮನವಿಗಳು ಬಂದಿರುವುದಿಲ್ಲ. |
| ಆ. | ಮೈಸೂರಿನಿಂದ ಗುಂಗ್ರಾಲ್‌ಛತ್ರ, ಕೋಮ್ಮೇಗೌಡನ ಕೊಪ್ಪಲು, ಹಳೆಬೀಡು, ಮೂಡಲಕೊಪ್ಪಲಿಗೆ ಹೋಗುವ ಮೈಸೂರು ನಗರ ಸಾರಿಗೆ ಬಸ್‌ಗಳನ್ನು ವಡ್ಡರಹಳ್ಳಿಗೆ ವಿಸ್ತರಿಸಲು ಅಥವಾ ಮೈಸೂರಿನಿಂದ ವಡ್ಡರಹಳ್ಳಿಗೆ ಪ್ರತ್ಯೇಕ ಮೈಸೂರು ನಗರ ಸಾರಿಗೆ ಬಸ್ ಸೌಲಭ್ಯ ವಿಸ್ತರಿಸಲು ಕ್ರಮ ತೆಗೆದುಕೊಳ್ಳಲಾಗುವುದೇ? | ಅನುಸೂಚಿ ಸಂಖ್ಯೆ 276ರಲ್ಲಿ ನಗರ ಬಸ್ ನಿಲ್ದಾಣದಿಂದ ಕೋಮ್ಮೇಗೌಡನ ಕೊಪ್ಪಲು ಗ್ರಾಮಕ್ಕೆ ಸಾರಿಗೆ ಕಾರ್ಯಾಚರಣೆಯಾಗುತ್ತಿದ್ದು, ಕೋಮ್ಮೇಗೌಡನ ಕೊಪ್ಪಲಿನಿಂದ ವಡ್ಡರಹಳ್ಳಿ ಗ್ರಾಮವು 1.3 ಕಿ.ಮೀಗಳಷ್ಟು ಅಂತರದಲ್ಲಿರುತ್ತದೆ. ಸದರಿ ಮಾರ್ಗದಲ್ಲಿ ಮಾರ್ಗ ಸಮೀಕ್ಷೆ ನಡೆಸಿ ಕೋಮ್ಮೇಗೌಡನ ಕೊಪ್ಪಲಿಗೆ ಕಾರ್ಯಾಚರಣೆಯಾಗುತ್ತಿರುವ ಸಾರಿಗೆಯನ್ನು ದಿನಾಂಕ:15.09.2021 ರಿಂದ ಜಾರಿಗೆ ಬರುವಂತೆ ವಡ್ಡರಹಳ್ಳಿ ಗ್ರಾಮದವರೆಗೆ ವಿಸ್ತರಿಸಿ 2 ಸುತ್ತುವಳಿಗಳ ಸೌಲಭ್ಯವನ್ನು ಕಲ್ಪಿಸಲಾಗಿದೆ. |

ಸಂಖ್ಯೆ: ಟಿಡಿ 192 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು